


Approved by the Department of Public Instruction

# The Karnataka Scout and Guide

# ಕರ್ನಾಟಕ ಸ್ಕೌಟ್ ಮತ್ತು ಗೈಡ್

**Vol. 75** JULY & AUGUST 1993 **No. 4-5**

## ರಾಷ್ಟ್ರೀಯ ಐಕ್ಯತಾ ಶಿಬಿರದ ವಿಶೇಷಾಂಕ

## NATIONAL INTEGRATION CAMP ISSUE





## The Karnataka Scout and Guide

Vol. 75 July & August 1993 No. 4-5




## CONTENTS



### Front Page Photo

Shri Khurshed Alam Khan, His Excellency the Governor of Karnataka arriving to inaugurate the National Integration Camp. Sri H. Viswanath, Hon'ble Minister of State for Kannada and Culture and Youth Services & Sports, Sri K. B. Shanmukhappa State Chief Commissioner & Smt. Lalitha Krishna Swamy State Commissioner (Guides) are also seen.

## ಕೆ. ಬಿ. ಷಣ್ಮುಖಪ್ಪ

ರಾಜ್ಯ ಮುಖ್ಯ ಆಯುಕ್ತರು

**ಆತ್ಮೀಯ ಬಂಧುಗಳೇ,**

ಜೂನ್ 1993ರ ಸಂಚಿಕೆಯನಂತರ ಈ ಮೂಲಕ ತಮ್ಮನ್ನು ಮತ್ತೊಮ್ಮೆ ಸಂಪರ್ಕಿಸುವ, ಸಂವಾದ ಮಾಡುವ ಅವಕಾಶ ಈಗ ದೊರಕಿದೆ.

ಕರ್ನಾಟಕ ಸ್ಕೌಟ್ ಮತ್ತು ಗೈಡ್ ನಿಯತಕಾಲಿಕ ನಮ್ಮ ಸಂಸ್ಥೆಯ ಮುಖವಾಣಿಯಾಗಿ ಕ್ರಮವಾಗಿ ನಮ್ಮೆಲ್ಲ ಚಟುವಟಿಕೆಗಳ ಸಾರಾಂಶವನ್ನು ನಿಮ್ಮ ಮುಂದಿಡಲು ಪ್ರಯತ್ನಿಸುತ್ತಿದೆ.

ಜುಲೈ ತಿಂಗಳಲ್ಲಿ ರಾಜ್ಯ ಸಂಸ್ಥೆಯ ಕೇಂದ್ರ ಕಛೇರಿಯ ಮಾರ್ಗದರ್ಶನದಲ್ಲಿ ನಡೆದ ರಾಷ್ಟ್ರೀಯ ಐಕ್ಯತಾ ಶಿಬಿರ ಒಂದು ಮಹತ್ಸಾಧನೆಯೆಂದೇ ಹೇಳಬೇಕು.

ರಾಷ್ಟ್ರದ ವಿವಿಧ ಭಾಗಗಳಿಂದ ಬಂದಿದ್ದ ಸ್ಕೌಟ್ ಮತ್ತು ಗೈಡ್‌ಗಳು ಈ ಆಂದೋಳನದ ಕ್ರಿಯಾತ್ಮಕ ಚಿತ್ರವನ್ನು ಸಮರ್ಥಿಸಿ ಒಂದು ಆಶಾಕಿರಣವನ್ನೇ ಬೆಳಗಿದ್ದಾರೆ. ಈ ಶಿಬಿರದಲ್ಲಿ ಪಾಲ್ಗೊಂಡ ಸನ್ಮಾನ್ಯ ರಾಜ್ಯಪಾಲರು, ಯುವಜನ ಸೇವೆ ಹಾಗೂ ಕ್ರೀಡಾ ಸಚಿವರು, ಯುವಜನ ಇಲಾಖೆ ಆಯುಕ್ತರು, ಸಹ ನಿರ್ದೇಶಕರು, ವಿದ್ಯಾ ಇಲಾಖೆಯ ಆಯುಕ್ತರು, ಏರ್ ಕಮೋಡರ್ ಶ್ರೀ ಮನ್‌ಬೀರ್ ಸಿಂಗ್, ಕೇಂದ್ರ ಸರ್ವೇಕ್ಷಣ ಇಲಾಖೆಯ ಬ್ರಿಗೇಡಿಯರ್ ಶ್ರೀ ಮೆನನ್ ಇನ್ನೂ ಇತರ ಗಣ್ಯವ್ಯಕ್ತಿಗಳು ಶಿಬಿರದ ಸಾಧನೆಗಳನ್ನೂ ಮಕ್ಕಳ ಚಟುವಟಿಕೆಗಳನ್ನೂ ಮುಕ್ತ ಕಂಠದಿಂದ ಶ್ಲಾಘಿಸಿ ಹರಸಿದ್ದಾರೆ. ಈ ರಾಷ್ಟ್ರದ ಭವಿಷ್ಯ ಸ್ಕೌಟ್ ಗೈಡ್ ಸಂಸ್ಥೆಗಳ ಕೈಯಲ್ಲಿ ಸುರಕ್ಷಿತವಾಗಿದೆಯೆಂಬ ಭರವಸೆ ನೀಡಿದ್ದಾರೆ. ನಮ್ಮ ರಾಜ್ಯದ ಎಲ್ಲ ಕಾರ್ಯಕರ್ತರೂ ಈ ಯಶಸ್ಸಿಗಾಗಿ ಶ್ರಮಿಸಿದ್ದಾರೆ. ಇವರುಗಳಿಗೆ ನನ್ನ ಧನ್ಯವಾದಗಳು.

ಸನ್ಮಾನ್ಯ ಮುಖ್ಯಮಂತ್ರಿಗಳೂ, ನಮ್ಮ ಅಧ್ಯಕ್ಷರೂ ಆದ ಶ್ರೀ ವೀರಪ್ಪ ಮೊಯಿಲಿಯವರು ಮನಸಾ ಶ್ಲಾಘಿಸಿ ಬರೆದ ಪತ್ರ ಸಹ ಈ ಆಂದೋಳನಕ್ಕೆ ಇಂದು ಶ್ರೀರಕ್ಷೆಯಾಗಿ ಬಂದಿದೆ. ಇದೇ ಸಂಚಿಕೆಯಲ್ಲಿ ಆ ಪತ್ರದ ಪ್ರತಿಯನ್ನೂ ನಿಮ್ಮ ಗಮನಕ್ಕೆ ತರಲು ಮುದ್ರಿಸಲಾಗಿದೆ.

ರಾಜ್ಯಾದ್ಯಂತ ನಮ್ಮ ಸಂಸ್ಥೆಯ ಕಾರ್ಯಕ್ರಮಗಳು ವ್ಯಾಪಕವಾಗಿ ಉತ್ಸಾಹದಿಂದ ಜರುಗುತ್ತಿರುವ ವರದಿಗಳು ರಾಜ್ಯ ಕೇಂದ್ರ ಕಛೇರಿಗೆ ಬರುತ್ತಿವೆ. ಜಿಲ್ಲಾ ಮಟ್ಟದಲ್ಲಿ ಸಹ ನಿರೀಕ್ಷೆಗೆ ಮೀರಿದ ಪ್ರಯತ್ನಗಳಾಗುತ್ತಾ ಬರುತ್ತಿವೆ. ಜಿಲ್ಲಾಧಿಕಾರಿಗಳ, ಕ್ಷೇತ್ರೀಯ ಅಧಿಕಾರಿಗಳೆಲ್ಲರ ಸಹಕಾರ ವಿಪುಲವಾಗಿ ದೊರಕುತ್ತಾ ಬಂದು ಈ ಆಂದೋಳನದಲ್ಲಿ ಸಾರ್ವಜನಿಕರ, ಅಧಿಕಾರಿಗಳ ಹಾಗೂ ಸರ್ಕಾರದ ವಿಶ್ವಾಸ ಹೆಚ್ಚು ಹೆಚ್ಚಾಗತೊಡಗಿದೆ.

ಇದು ನಾವು ಸ್ವಯಂಪ್ರೇರಣೆಯಿಂದ ಒಪ್ಪಿಕೊಂಡ ಹೊಣೆಯಲ್ಲವೇ ?

ಹಾಗಾಗಿ ಇದು ಕ್ರಿಯಾತ್ಮಕವಾಗಿಯೂ, ಅರ್ಥಪೂರ್ಣವಾಗಿಯೂ, ವ್ಯಾಪಕವಾಗಿಯೂ ಹೆಮ್ಮರವಾಗಿ ಬೆಳೆದು ಮಕ್ಕಳಿಗೂ, ಯುವಜನಾಂಗಕ್ಕೂ, ಸಮಾಜಕ್ಕೂ ತನ್ನ ನಿಸ್ಪೃಹ ಸೇವೆಯನ್ನು ಸಲ್ಲಿಸುವಂತೆ ಬೆಳೆಯಲೆಂದು ಆಶಿಸೋಣ. ನಾವೆಲ್ಲಾ ಈ ದಿಕ್ಕಿನಲ್ಲಿ ಶ್ರಮಿಸೋಣ.

ಇತಿ ತಮ್ಮ ವಿಶ್ವಾಸಿ

ಕೆ. ಬಿ. ಷಣ್ಮುಖಪ್ಪ

# ದೇವರಿಗೆ ಮತ್ತು ದೇಶಕ್ಕೆ ನನ್ನ ಕರ್ತವ್ಯ

— ಯು. ಗೋಪಾಲಕೃಷ್ಣ ಭಟ್, ಎಲ್.ಟಿ. (ಸ್ಕೌಟ್)

ದೇವರು ಎಂಬ ಶಬ್ದಕ್ಕೆ 'ಸ್ಕೌಟ್' ಚಳುವಳಿಯು ಕೊಡುವ ಅರ್ಥವೈಶಾಲ್ಯವು ಯಾವುದೇ ಧಾರ್ಮಿಕ ವಿವರಣೆಗಿಂತ ಭಿನ್ನರೂಪದ್ದು. ರಾಮ್, ರಹಿಮ್, ಯೇಸು ಇತ್ಯಾದಿಯಾಗಿ ಯಾವುದೇ ರೂಪದಲ್ಲಿ ದೇವರನ್ನು ಕಲ್ಪಿಸಿ ಆರಾಧಿಸುವುದಕ್ಕೆ ಇಲ್ಲಿ ವಿರೋಧವಿಲ್ಲ. ಆದರೆ ದೇವರು ಎಲ್ಲಾ ಜೀವಿಗಳ ರಕ್ಷಕ ; ಅಸ್ಥಿತ್ವದಲ್ಲಿರುವ ಎಲ್ಲಾ ವಸ್ತುಗಳೂ ದೇವರ ಕೃಪೆ ; ಸಕಲ ಮಾನವ ಜನಾಂಗವೇ ದೇವರ ಮಕ್ಕಳು ಎಂಬ ಕಲ್ಪನೆ ನಮ್ಮದು. ನಾವು ಮಾಡಿದ ಯಾವುದೇ ಕೆಲಸ ಇತರರಿಗೆ ಹಾನಿಯನ್ನುಂಟುಮಾಡದೆ — ನಮಗೂ ಇತರರಿಗೂ ಉತ್ತಮ ಪ್ರತಿಫಲ, ಮನಸ್ಸಂತೋಷ ನೀಡುವಂತಿದ್ದರೆ ಅದನ್ನು ಒಳ್ಳೆಯ ಕೆಲಸವೆನ್ನುತ್ತೇವೆ ; ದೇವರು ಮೆಚ್ಚುವ ಕಾರ್ಯವೆನ್ನುತ್ತೇವೆ. ಸತ್ಕಾರ್ಯಗಳಲ್ಲಿ ನಾವು ದೇವರ ಅಸ್ಥಿತ್ವವನ್ನು ಗುರುತಿಸುತ್ತೇವೆ. ಅರ್ಥಾತ್ "ದೇವರೆಂದರೆ ಸಕಲ ಸತ್ಕಾರ್ಯಗಳ ಸಾಕಾರ ಸ್ವರೂಪ" ವೆನ್ನಬಹುದು.

ಬೆಳಗ್ಗೆ-ಸಂಜೆಯ ಪ್ರಾರ್ಥನೆಗಳು, ಆಹಾರ ಸ್ವಿಕಾರಕ್ಕಿಂತ ಮೊದಲು ದೇವರ ಸ್ಮರಣೆ ಇತ್ಯಾದಿಗಳು ಎಳೆಯ ಪ್ರಾಯದಿಂದಲೇ ಮಕ್ಕಳ ಮನಸ್ಸಿನಲ್ಲಿ 'ದೇವರ' ಕುರಿತಾದ ಅಭಿಪ್ರಾಯ ಮೂಡಿಸಲು ಸಹಾಯಕವಾಗುತ್ತವೆ. ಪರರಿಗೆ ನೋವು, ಅಡ್ಡಿ, ಹಿಂಸೆಗಳಾಗದಂತೆ ಪ್ರಾರ್ಥನೆಗಳು, ಸಕಲ ಚರಾಚರಗಳೂ ದೇವರ ಸೃಷ್ಠಿಯೆಂದು ತಿಳಿದು ಅದನ್ನು ಹಾಳುಮಾಡದಿರುವುದು, ಸಮಾಜಕ್ಕೆ ಉಪಯೋಗವಾಗುವಂತಹ ಕೆಲಸಗಳನ್ನು ಮಾಡುವುದೇ ದೇವರಿಗೆ ನಾವು ಸಲ್ಲಿಸಬೇಕಾದ ಕರ್ತವ್ಯ.

ಸಾಮಾನ್ಯ ಪ್ರಜೆಗೂ ದೇಶದ ಬಗ್ಗೆ ಕರ್ತವ್ಯವಿದೆ. ಸಮಾಜದ ಯಾವುದೇ ಸೊತ್ತನ್ನು ಹಾಳುಮಾಡದಿರುವುದು, ದೇಶದ ಗೌರವಕ್ಕೆ ಕುಂದುಂಟಾಗುವ ಮಾತನ್ನು ಆಡದಿರುವುದು, ರಾಷ್ಟ್ರಧ್ವಜ, ರಾಷ್ಟ್ರಗೀತೆ, ರಾಷ್ಟ್ರ ಲಾಂಛನಗಳನ್ನು ಗೌರವಿಸುವುದು ಹಾಗೂ ರಾಷ್ಟ್ರದ ಗೌರವಕ್ಕೆ ಕುಂದುಟಾಗುವ ಕೃತ್ಯಗಳನ್ನು ವಿರೋಧಿಸುವುದು ನಮ್ಮ ಕರ್ತವ್ಯವಾಗಿದೆ. ತಾನು ಮಾಡಬೇಕಾದ ಕೆಲಸವನ್ನು ನಿರ್ವಂಚನೆಯಿಂದ ಮಾಡುವುದೂ ದೇಶದ ಏಳ್ಗೆಗಾಗಿ ನೀಡುವ ಕೊಡುಗೆಯಾಗಿದೆ. ಸ್ಕೌಟುಗಳಾಗಿ ದೇಶಕ್ಕೆ ನಮ್ಮ ಕರ್ತವ್ಯವೂ ಇದೇ ಆಗಿದೆ.

○

## ಹಾಸ್ಯಾಸ್ಪದವಾಗಬಾರದು !

ನಮ್ಮಲ್ಲಿ ಅನೇಕ ಇಲ್ಲವೇ ಹಲವಾರು ಬೋಧನೆಗಳು, ತತ್ವಗಳು, ನಾಣ್ನುಡಿಗಳು ಅಲ್ಲದೆ ಮಹಾತ್ಮರು ಸಾರಿದ ಉಪದೇಶ-ನೀತಿ-ನಿಯಮಗಳಿವೆ. ಇವುಗಳೆಲ್ಲ ಒಣ ವೇದಾಂತಗಳಲ್ಲ. ಇಂತಹ ಅಪೂರ್ವ ನುಡಿಮುತ್ತುಗಳನ್ನು ಇಂದಿಗೂ ಹಾಗೂ ಮುಂದಿಗೂ ಗೋಡೆಗಳಲ್ಲಿ, ಭಿತ್ತಿಪತ್ರಿಕೆಗಳಲ್ಲಿ ಬರೆದಿಡುತ್ತೇವೆ. ಇಂಥಾ ಅನುಭವಸ್ಥ ಸಾರಗಳಲ್ಲಿ ಸಾರ್ವಕಾಲಿಕ ಸತ್ಯಾಂಶಗಳು ಅಡಗಿವೆ. ಇವುಗಳನ್ನು ಕೊಂಚವಾದರೂ ನಮ್ಮ ಬದುಕಿನಲ್ಲಿ, ಸಾರ್ವಜನಿಕ ಪರಿಸರದಲ್ಲಿ ಅಳವಡಿಸುವುದು ಮುಖ್ಯ.

ಸಂಗ್ರಹ— **ಮಂಜುನಾಥರಾವ್,** ಗಸ್ತುನಾಯರ್.
ಲಾಲ್‌ಬಹದೂರ್ ಶಾಸ್ತ್ರಿ ಜೀ ಸ್ಕೌಟ್ ಗ್ರೂಪ್, ಮಂಜುವಾಣಿ.

# ಮರಿಗಳ ಮುನ್ನಡೆಯಲ್ಲಿ ಪದಕಗಳು

— ಆರ್. ಹೆಚ್. ಎಂ. ಸಿದ್ಧಲಿಂಗಯ್ಯ
ಎಂ.ಎ., ಬಿ.ಎಡ್., ಎ.ಎಲ್.ಟಿ. (ಸಿ)

( ಹಿಂದಿನ ಸಂಚಿಕೆಯಿಂದ ಮುಂದುವರೆದುದು )

ಮರಿಗಳ ಮುನ್ನಡೆಯಲ್ಲಿ "ತೃತೀಯ ಚರಣ" ಮತ್ತು ಚತುರ್ಥ ಚರಣ ಹಾಗೂ ವಿಶೇಷ ಪ್ರವೀಣತಾ ಪದಕಗಳನ್ನು ಮರಿಯು ಪಡೆಯಬಹುದಾಗಿದೆ. ಮರಿಗಳಲ್ಲಿ ಉತ್ಸಾಹ ಚಿಮ್ಮಿಸುವಂತಹ ವಿವಿಧ ಕೌಶಲ್ಯಗಳ ಬುದ್ಧಿ ವಿಕಸನಗೊಳ್ಳುವ ಚಟುವಟಿಕೆಗಳನ್ನು ಮರಿಯು ಕೈಗೊಂಡು ಈ ಪದಕಗಳನ್ನು ಪಡೆಯಲು ಈ ಕೆಳಕಂಡ ಸಾಧನೆಗಳನ್ನು ಮಾಡಬೇಕು.

**"ತೃತೀಯ ಚರಣ" ಪದಕಕ್ಕೆ ಪರೀಕ್ಷೆಗಳು**

1. ಕರಕೌಶಲ್ಯದಲ್ಲಿ ಪರಿಣಿತಿಹೊಂದಿ ನೆರೆಹೊರೆಯಲ್ಲಿರುವ ಅಂಗವಿಕಲ ಬಾಲಕನಿಗೆ ಒಂದು ಕರಕುಶಲ ವಸ್ತುವನ್ನು ತಯಾರಿಸಿ ಕೊಡುವುದು.

2. ದಿಕ್ಸೂಚಿಯ ಎಂಟು ಪ್ರಧಾನ ದಿಕ್ಕುಗಳನ್ನು ತಿಳಿಯುವುದು.

3. ನಮ್ಮ ನಾಡಿನ ಜಿಲ್ಲೆಯ ಮಾತೃಭಾಷೆ ಮತ್ತು ಇಲ್ಲಿಯ ಜನರು ವಾಸಿಸುವ ಹಾಗೂ ಉಡುಗೆ-ತೊಡುಗೆಗಳ ಬಗ್ಗೆ ಅಕೇಲನಿಗೆ ತಿಳಿಸುವುದು.

4. ಪ್ರಥಮ ಚಿಕಿತ್ಸೆಯಲ್ಲಿ ಗಾಯಗಳು ಮತ್ತು ಕೀಟಗಳಿಂದ ಕಡಿತ ಉಂಟಾದಾಗ ಗುಣಪಡಿಸುವ ವಿಧಾನವನ್ನು ತಿಳಿದಿರಬೇಕು.

5. ಹಿಂದಿನ ಕನಿಷ್ಟ ಎರಡು ಪ್ರಾರ್ಥನಾ ಸಭೆಗಳಲ್ಲಿ ಭಾಗವಹಿಸಬೇಕು.

6. ಹಿಂಡು ನಡೆಸುವ ಸಾರ್ವಜನಿಕ ಸೇವಾ ಕಾರ್ಯದಲ್ಲಿ ಭಾಗವಹಿಸುವುದು.

7. ಇಂದ್ರಿಯ ಶಿಕ್ಷಣ ಆಟಗಳಲ್ಲಿ ಜಯಪ್ರದವಾಗಿ ಭಾಗವಹಿಸಿರಬೇಕು. (ಕನಿಷ್ಟ ಮೂರರಲ್ಲಾದರೂ ಭಾಗವಹಿಸಿರಲೇಬೇಕು)

8. ತನ್ನ ಹಿಂಡಿನೊಡನೆ ಒಂದು ದಿನದ ಹೊರಸಂಚಾರ ಶಿಬಿರಕ್ಕೆ ಹೋಗಿ ಬರಬೇಕು.

9. ತನಗಿಂತ ಕಿರಿಯರಾದ ಮಕ್ಕಳಿಗೆ ನೈರ್ಮಲ್ಯದ ಅಭ್ಯಾಸಗಳಲ್ಲಿ ಸಹಾಯ ಮಾಡುವುದು.

10. ಈ ಕೆಳಕಂಡ ಪ್ರವೀಣತಾ ಪದಕಗಳಲ್ಲಿ ಕನಿಷ್ಟ ಒಂದಕ್ಕಾದರೂ ಅರ್ಹತೆ ಗಳಿಸಬೇಕು.

1. ಸಂವೀಕ್ಷಕ 2. ತಂಡದ ಆಟಗಾರ 3. ಗೃಹಕರ್ಮಿ 4. ಮಾರ್ಗದರ್ಶಿ.

ತೃತೀಯ ಚರಣ ಪರೀಕ್ಷೆಗಳನ್ನು ಪೂರೈಸಿದ ಬಳಿಕ ಪರೀಕ್ಷೆಗಳನ್ನು ಏರ್ಪಡಿಸಿದ "ಶಿಕ್ಷಣ-ಸಲಹೆಗಾರ"ರ ಶಿಫಾರಸಿನಂತೆ ಸಂದರ್ಭಾನುಸಾರ ಸ್ಥಳೀಯ ಸಂಸ್ಥೆ ಅಥವಾ ಜಿಲ್ಲೆ ಸಂಸ್ಥೆಯು "ದ್ವಿತೀಯ ಚರಣ" ಪಡೆದಿರುವ ಮರಿಗೆ "ತೃತೀಯ ಚರಣ" ಪದಕವನ್ನು ನೀಡುತ್ತದೆ. "ದ್ವಿತೀಯ ಚರಣ ಪದಕದ ಬದಲಾಗಿ ಸಮವಸ್ತ್ರದ ಮೇಲೆ ಅದೇ ಸ್ಥಳದಲ್ಲಿ "ತೃತೀಯ ಚರಣ" ಪದಕವನ್ನು ಧರಿಸತಕ್ಕದ್ದು.

**"ಚತುರ್ಥ ಚರಣ" ಪದಕಕ್ಕೆ ಪರೀಕ್ಷೆಗಳು**

1. ತಮಗೆ ಪ್ರೀತಿ ಎನಿಸಿದ ಪ್ರಾಣಿ, ಅಥವಾ ಪಕ್ಷಿಯೊಂದನ್ನು ಸಾಕಿ ಸಲುಹಿ ಮೂರು ತಿಂಗಳಾದ ಮೇಲೆ ಅವು ಮೊದಲಿಗಿಂತಲೂ ಹೇಗೆ ಬದಲಾವಣೆ ಹೊಂದಿತೆಂಬುದನ್ನು ಲಕ್ಷ್ಯವಿಟ್ಟು ಗಮನಿಸಿ ಇವನ್ನು ಕುರಿತು ಬರೆದಿಡಬೇಕು.

2. ಒಂದು ದಿನದ ಪೂರ್ಣ ರಾತ್ರಿಯ ಹಿಂಡಿನ ಶಿಬಿರವೊಂದರಲ್ಲಿ ಭಾಗವಹಿಸಬೇಕು.

3. ಹಿಂಡಿನ ವಿಶೇಷೋದ್ದೇಶ ಪ್ರವಾಸವೊಂದರಲ್ಲಿ ಭಾಗವಹಿಸಬೇಕು.

4. ಸುರುಳಿಗಂಟು, ಮಲುಕಿನಗಂಟು ಮತ್ತು ಈ ಗಂಟುಗಳ ಉಪಯೋಗ, ಪ್ರಯೋಜನ ತಿಳಿದಿರಬೇಕು.

5. ಹತ್ತಿರವಿರುವ ಅಂಚೆ ಕಛೇರಿಯಲ್ಲಿ ಉಳಿತಾಯದ ಖಾತೆಯನ್ನು ತೆರೆಯಬೇಕು ಇಲ್ಲವೆ ತಮ್ಮ ಆಸುಪಾಸಿನಲ್ಲಿ ಎರಡಾದರೂ ಸಸಿಗಳನ್ನು ನೆಟ್ಟು ಆರು ತಿಂಗಳವರೆಗೆ ಬೆಳೆಯುವಿಕೆಯನ್ನು ವೀಕ್ಷಿಸುತ್ತಾ ಆರೈಕೆ ಮಾಡಬೇಕು.

6. ಧಾರ್ಮಿಕ ಸಮಾರಂಭವೊಂದರಲ್ಲಿ ಭಾಗವಹಿಸಿ ತಮ್ಮ ಅನುಭವವನ್ನು ಕಬ್ ಮಾಸ್ಟರ್‌ರವರಿಗೆ ವಿವರಿಸಬೇಕು.

7. ಈ ಕೆಳಕಂಡವುಗಳಲ್ಲಿ ಯಾವುದಾದರು ಒಂದು ಪ್ರಾವೀಣ್ಯ ಪದಕವನ್ನು ಪಡೆಯಬೇಕು.

1) ವಿಶ್ವರಕ್ಷಣೆ 2) ಪ್ರಥಮ ಚಿಕಿತ್ಸಕ 3) ಸೈಕಲ್ ಸವಾರ 4) ತೋಟಗಾರ

8. ಹತ್ತಿರವಿರುವ ಒಂದು ಸ್ಕೌಟ್ ಪೆಟ್ರೋಲ್ ಅಥವಾ ಟ್ರೂಪ್ ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು ಗಮನಿಸಿ ತಮ್ಮ ಅಭಿಪ್ರಾಯಗಳನ್ನು ಕುರಿತು ಕಬ್ ಮಾಸ್ಟರ್‌ರೊಂದಿಗೆ ಚರ್ಚಿಸಬೇಕು. ಅಥವಾ ತಮ್ಮ ಪರಿಸರದಲ್ಲಿ ಹಿಂದೆ ಸ್ಕೌಟ್-ಗೈಡ್‌ಗಳಾಗಿದ್ದವರ ವಿಳಾಸಗಳನ್ನು ಸಂಗ್ರಹಿಸಿ ಅದನ್ನು ಕಬ್ ಮಾಸ್ಟರ್‌ರವರಿಗೆ ವಹಿಸಬೇಕು. ಅಥವಾ ತಮ್ಮ ಸ್ಥಳಕ್ಕೆ ಹತ್ತಿರವಿರುವ ಪೊಲೀಸ್ ಠಾಣೆ, ಆಸ್ಪತ್ರೆ, ರೈಲು ನಿಲ್ದಾಣ, ಅಗ್ನಿಶಾಮಕ ದಳ, ಬಸ್ ನಿಲ್ದಾಣ ಮುಂತಾದ ಮಹತ್ವದ ಸ್ಥಳಗಳ ಬಗ್ಗೆ ಮಾಹಿತಿ ಪಡೆದಿರಬೇಕು.

ಚತುರ್ಥ ಚರಣ ಪರೀಕ್ಷೆಗಳನ್ನು ಪೂರೈಸಿದ ಬಳಿಕ ಪರೀಕ್ಷೆಗಳನ್ನು ಏರ್ಪಡಿಸಿದ "ಶಿಕ್ಷಣ - ಸಲಹೆಗಾರರ" ಶಿಫಾರಸಿನಂತೆ ಸಂದರ್ಭಾನುಸಾರ ಸ್ಥಳೀಯ ಸಂಸ್ಥೆ ಅಥವಾ ಜಿಲ್ಲೆ ಸಂಸ್ಥೆಯು ತೃತೀಯ ಚರಣ ಪಡೆದಿರುವ ಮರಿಗೆ ಚತುರ್ಥ ಚರಣ ಪದಕವನ್ನು ನೀಡುತ್ತದೆ. ಸಮವಸ್ತ್ರದ ಮೇಲೆ ತೃತೀಯ ಚರಣ ಪದಕದ ಬದಲಾಗಿ ಅದೇ ಸ್ಥಳದಲ್ಲಿ ಈ ಪದಕವನ್ನು ಧರಿಸತಕ್ಕದ್ದು.

## ಮರಿಗಳ ವಿಶೇಷ ಪ್ರವೀಣತಾ ಪದಕಗಳು

1. ಪ್ರಥಮ ಚರಣ ಮರಿಯು ಎರಡಕ್ಕೆ ಮೀರದಂತೆ ವಿಶೇಷ ಪ್ರವೀಣತಾ ಪದಕಗಳನ್ನು ಪಡೆಯಬಹುದು.

2. ದ್ವಿತೀಯ ಚರಣ ಮರಿಯು ಈಗಾಗಲೇ ಗಳಿಸಿರುವ ಎರಡು ಪದಕಗಳ ಜೊತೆಗೆ ಇನ್ನು ನಾಲ್ಕಕ್ಕೆ ಮೀರದಂತೆ ವಿಶೇಷ ಪ್ರವೀಣತಾ ಪದಕಗಳನ್ನು ಗಳಿಸಬಹುದು.

3. ತೃತೀಯ ಚರಣ ಮರಿಯು ಉಳಿದಿರುವ ವಿಶೇಷ ಪ್ರವೀಣತಾ ಪದಕಗಳಲ್ಲಿ ಯಾವುದನ್ನೇ ಆದರೂ ಇಲ್ಲವೆ ಎಲ್ಲವನ್ನು ಗಳಿಸಬಹುದು.

4. ಇವಲ್ಲದೆ ಮರಿಗಳ ವಿಶೇಷ ಪ್ರವೀಣತಾ ಪದಕಗಳನ್ನು ಐದು ಗುಂಪುಗಳಾಗಿ ವಿಂಗಡಿಸಬಹುದು—

**ಶೀಲ:** ಅ) ಸಂಗ್ರಾಹಕ ಆ) ತೋಟಗಾರ ಇ) ಸಂವೀಕ್ಷಕ

**ದೈಹಿಕ ಆರೋಗ್ಯ:** ಅ) ವ್ಯಾಯಾಮ ಪಟು ಆ) ಸೈಕಲ್ ಸವಾರ ಇ) ಈಜುಗಾರ ಈ) ತಂಡದ ಆಟಗಾರ

**ಹಸ್ತಕೌಶಲ್ಯ:** ಅ) ಚಿತ್ರಕಾರ ಆ) ಗೃಹಕಲೆ ಇ) ಆಟಿಕೆ ಮಾಡುವವ

**ಸೇವೆ:** ಅ) ಬಾಣಸಿಗ ಆ) ಪ್ರಥಮ ಚಿಕಿತ್ಸಕ ಇ) ಮಾರ್ಗದರ್ಶಿ ಈ) ಮನೆ ತೈನಾತಿ

**'ವಿಶ್ವ ರಕ್ಷಣಾ ಪದಕ':** ಬಾಲಕರು ಮರಿಗಳ ಹಿಂಡಿನಲ್ಲಿ ಸೇರಿ ಪ್ರವೇಶದ ಅಗತ್ಯಗಳನ್ನು ತಿಳಿದುಕೊಂಡು ತಾನು ಹಿಂಡಿನಲ್ಲಿ ಮುನ್ನಡೆಯಲು ಬೇಕಾಗುವ ಪದಕಗಳು ಯಾವುವೆಂಬುದನ್ನು ಪೂರ್ಣವಾಗಿ ತಿಳಿದುಕೊಂಡಲ್ಲಿ ಅವನು ತನ್ನ ಹಿಂಡಿಗೆ ಕೀರ್ತಿಯನ್ನು ತರುವುದರಲ್ಲಿ ಯಾವ ಸಂಶಯವೂ ಇಲ್ಲ.

ಮರಿಗಳಲ್ಲಿ ಬಾಲ್ಯದಲ್ಲಿ ಒಡಮೂಡುವ ಮಹತ್ವಾಕಾಂಕ್ಷೆಗಳನ್ನು ಹಿಂಡಿನ ಮುನ್ನಡೆಯಲ್ಲಿ ಪದಕಗಳನ್ನು ಪಡೆದಾಗ ಆಗುವ ಸಂತೋಷ ಅವನಲ್ಲಿ ಮೂಡುವ ಸಹಬಾಳ್ವೆ, ಸಹಜೀವನ, ವಿಶಾಲ ದೃಷ್ಟಿ, ಉತ್ತಮ ಗುಣಗಳನ್ನು ಬೆಳೆಸುವುದರಲ್ಲಿ ಸಹಾಯವಾಗುತ್ತದೆ. ಮರಿಗಳ ಹಿಂಡಿನಲ್ಲಿ ಅವನು ಸ್ವತಃ ಗಳಿಸುವ ಮುನ್ನಡೆಯುವ ಪದಕಗಳು ಅವನ ಬಾಳ ಜೀವನಕ್ಕೆ ಸ್ಫೂರ್ತಿ ಚೈತನ್ಯವನ್ನು ನೀಡುವವು. ಅಲ್ಲದೆ ಉತ್ತಮ ಸತ್ಪ್ರಜೆಯಾಗಲು ಮಾರ್ಗದರ್ಶನ ಸಿಗುವುದು.

# ಇಗೂ ಒಂದು ಆಟ ಆಡಿ

**ಮಾಧವರಾವ್ ಜನವಾಡ್ಕರ್,** ಡಿ.ಓ.ಸಿ. (ಎಸ್)

ನೀವು ಕನಿಷ್ಠ ಒಂದಾದರೂ ಆಟದಲ್ಲಿ ದಳದ ಜೊತೆ ಭಾಗವಹಿಸಬೇಕಾಗುತ್ತದೆ. ಕೆಲವು ಆಟಗಳು ಅತೀ ಉತ್ಸುಕತೆಯ ಮತ್ತು ಪರಿಶ್ರಮದ ಆಟಗಳಾಗಿವೆ. ಸಾಂಘಿಕ ಭಾವನೆ, ಸಾಹಸ ಮತ್ತು ಮನೋರಂಜನೆ ಇದರಿಂದ ದೊರೆಯುತ್ತದೆ. ಈ ಆಟಗಳನ್ನು ಆಡಲು ಪೂರ್ವಸಿದ್ಧತೆ ಅವಶ್ಯಕವಾಗಿದೆ. ಆಟಗಳು ಆದಷ್ಟು ಸಣ್ಣ ಗುಂಪುಗಳಾದರೆ ಸಹಾಯವಾಗುತ್ತದೆ. ಇದರಿಂದ ದೈಹಿಕ, ಮಾನಸಿಕ, ಬೆಳವಣಿಗೆಗೆ ಸಹಕಾರಿಯಾಗುತ್ತದೆ.

### 1. ಮರಗಳನ್ನು ಹತ್ತುವುದು

ಟಿಂಬರ ಹೀಚ್ ಗಂಟನ್ನು ಹಾಕಿ ಮರಹತ್ತಿ ನಂತರ ರೋಲಿಂಗ್ ಹೀಚ್ ಗಂಟಿನೊಂದಿಗೆ ಮರ ಇಳಿಯುವುದು.

### 2. ಆಲೂಗಡ್ಡೆ ಕುದಿಸುವುದು

20 ನಿಮಿಷದಲ್ಲಿ ಒಂದು ಗ್ಯಾಡ್ಜೆಟ್ ಮಾಡಿ ಮೂರು ಕಟ್ಟಿಗೆಗಳಿಂದ ಬೆಂಕಿ ಹೊತ್ತಿಸಿ, ನೀರು ಕಾಯಿಸಿ ಅದರಲ್ಲಿ ಆಲೂಗಡ್ಡೆ ಗಳನ್ನು ಕುದಿಸುವುದು.

### 3. ಜೀವನ ಹಗ್ಗ ಎಸೆತ

20 ಅಡಿ ದೂರದಲ್ಲಿ ಜೀವನ ಹಗ್ಗ ಎಸೆಯುವುದು, ನಿಜವಾದ ಅಂತರಕ್ಕೆ ಅಂಕಗಳನ್ನು ಕೊಡಲಾಗುವುದು.

### 4. ಹಗ್ಗದ ಕೆಳಗಿಂದ ದಾಟುವುದು

ಎರಡು ಮರಗಳ ಮಧ್ಯದಲ್ಲಿ ನೆಲದಿಂದ ಒಂದು ಅಡಿ ಎತ್ತರಕ್ಕೆ ಒಂದು ಹಗ್ಗ ಕಟ್ಟಿ 20 ಅಡಿ ದೂರದಿಂದ ಒಂದು ಹಗ್ಗದ ಕೆಳಗಿನಿಂದ ತೆವಳುತ್ತಾ ಮುನ್ನಡೆಯುವುದು. (ಹಾವಿನಂತೆ ಹೊಟ್ಟೆಯಿಂದ ನೆಲದಲ್ಲಿ ತೆರಳುತ್ತಾ ಮುಂದೆ ಸಾಗುವುದು)

### 5. ಪ್ಲಾಸ್ಟಿಕ್ ಕಾಸ್ಟ ಮಾಡುವುದು

ಅಡವಿಯಲ್ಲಿ ಪ್ರಾಣಿಗಳ ಚಿನ್ಹೆಗಳನ್ನು ತಿಳಿದು ಪ್ಲಾಸ್ಟರ್ ಕಾಸ್ಟ (ಸಾಚಾ) ಅಚ್ಚು ತಯಾರಿಸುವುದು.

### 6. ಟೆಂಟ್ (ಗುಡಾರ) ಹಾಕುವುದು

ದಳದ ನಾಯಕರು ದೂರದಲ್ಲಿ ಕುಳಿತಿರಬೇಕು ಮತ್ತು ಅಲ್ಲಿಂದಲೆ ತಮ್ಮ ದಳದವರಿಗೆ ನಿರ್ದೇಶನ ಕೊಡುವುದು. ದಳದವರು ಟೆಂಟು ಹಾಕುವದು. ಇದಕ್ಕೆ ಕೇವಲ 5 ನಿಮಿಷ.

### 7. ಸಪ್ಪಳ ಗರ್ಜನೆ ತೋರಿಸುವುದು (ಕಿಮ್ಸ್‌ಗೇಮ್)

ಪರದೆಗಳ ಹಿಂದೆ ನಿಂತು 20 ಪ್ರಕಾರದ ಸಪ್ಪಳಗಳನ್ನು ಮಾಡಿ ನಂತರ ಅದನ್ನು ಕೇಳಿ ನಂತರ ಹಾಳೆ ಮೇಲೆ ಬರೆಯುವದು. ಸಪ್ಪಳ ಈ ಪ್ರಕಾರ ಇರುವುದು, ಕಾಗದ ಹರಿಯುವುದು, ಬ್ರಶ್ ಮಾಡುವುದು, ನೀರು ಹಾಕುವುದು, ನಾಣ್ಯಗಳನ್ನು ಹಾರಿಸುವುದು, ಬಟ್ಟೆಗಳನ್ನು ಹರಿಯುವುದು, ಪ್ರಾಣಿಗಳ ಕೂಗು, ವಾರಪತ್ರಿಕೆ ಮಡಿಸುವುದು ಮುಂತಾದುವುಗಳು.

### 8. ಕಂಠವಸ್ತ್ರ ಸರಿಯಾಗಿ ಧರಿಸುವುದು

ಅವರವರ ದಳದಲ್ಲಿ ನಿಲ್ಲಿಸಿ ನಂತರ ಅವರವರ ಕಂಠವಸ್ತ್ರಗಳನ್ನು ತೆಗೆದು 5 ಮೀಟರ್ ದೂರದಲ್ಲಿ

ಇಡುವದು, ಸೀಟಿ ಹೊಡೆದ ತಕ್ಷಣ ಎಲ್ಲರೂ ಕತ್ತಲೆಯಲ್ಲಿಯೇ ತಮ್ಮ ತಮ್ಮ ಕಂಠವಸ್ತ್ರವನ್ನು ಧರಿಸಬೇಕು, ಇದಕ್ಕೆ 5 ನಿಮಿಷ ಕೊಡಲಾಗಿದೆ.

ಇದರಲ್ಲಿ ಹಾಸ್ಯ ನೋಡೋಣ ಅಂದರೆ, ಈ ದಳದ ಕಂಠವಸ್ತ್ರಗಳ ಬಣ್ಣ ಬದಲಾವಣೆ ಯಾದಲ್ಲಿ ಆದನ್ನೇ ನೋಡಿ, ಅದರಲ್ಲಿ ಸರಿಯಾಗಿ ಧರಿಸಿಕೊಂಡಿರುವವರಿಗೆ ಅಂಕಗಳನ್ನು ಕೊಡುವುದು.

### 9. ನಿಧಿಶೋಧನೆ

ಆಟವನ್ನು ಸಾಮಾನ್ಯವಾಗಿ ರಾತ್ರಿಯಲ್ಲಿಯೇ ಆಡಿಸಲಾಗುವುದು. ಯಾವುದಾದರೊಂದು ಮರದ ಟೊಂಗೆಗೆ ನಿಧಿಯನ್ನು ಜೋತಾಡಿಸಿ, ಆಟದ ನಾಯಕನು ಅದೇ ಮರದ ಮೇಲೆ ಅಡಗಿ ಕುಳಿತಿರುತ್ತಾನೆ, ಸೀಟಿ ಊದಿದ ತಕ್ಷಣ ಎಲ್ಲರೂ ಆ ಮರವನ್ನು ಹತ್ತಿ ನಿಧಿಶೋಧನೆ ಮಾಡುತ್ತಾರೆ. ಯಾವ ತಂಡದವರು ಮೊದಲು ಹುಡುಕುತ್ತಾರೋ ಅವರು ಅಂಕಗಳನ್ನು ಪಡೆಯುತ್ತಾರೆ. ನಿರ್ಧಿಷ್ಟವಾದ ಸ್ಥಳವನ್ನು ದಾಟಿ ಯಾರೂ ಹೋಗಕೂಡದು. ರಾತ್ರಿಯಲ್ಲಿ ಬೆಳದಿಂಗಳು ಇಲ್ಲದಿದ್ದರೆ ಬ್ಯಾಟ್ರಿ ಉಪಯೋಗ ಮಾಡಬಹುದು. ಕೇವಲ 15 ನಿಮಿಷಗಳ ಕಾಲ ಮಾತ್ರ ಆಡಬೇಕು.

### 10. ಕುರುಡರ ಗಂಟು

ದಳಗಳನ್ನು ಪ್ರತ್ಯೇಕವಾಗಿ ನಿಲ್ಲಿಸಿ ಅವರವರ ಹಗ್ಗಗಳನ್ನು ಒಂದು ಸ್ಥಳದಲ್ಲಿ ಇಟ್ಟು ನಂತರ, ಅವರವರ ಕಣ್ಣುಗಳನ್ನು ಮುಚ್ಚಿ, ತಮ್ಮ ತಮ್ಮ ಹಗ್ಗಗಳನ್ನು ಹುಡುಕಿ ಅದರಲ್ಲಿ ತಿಳಿಸಿದ ಗಂಟುಗಳನ್ನು ಹಾಕಿ ಬಿಡಬೇಕು, ಇದಕ್ಕೆ 5 ನಿಮಿಷಗಳ ಕಾಲ ಇರುತ್ತದೆ. ಯಾವ ದಳದವರು ಇದರಲ್ಲಿ ಸಫಲವಾಗುತ್ತಾರೊ ಅವರಿಗೆ ಜೈಕಾರ ಹಾಕುವುದು, ಅಥವಾ ಘರ್ಜನೆ ಮಾಡುವ ಮೂಲಕ ಆಟಗಳನ್ನು ಕೊನೆಮಾಡುವುದು.

---

## ನೀ ಏನಾಗಬೇಕು ?

ಒಳ್ಳೆಯ ಸ್ಕೌಟಾಗಲೇನೇನು ಬೇಕು ?
ಒಳ್ಳೆಯ ನಡೆ-ನುಡಿ ಕಲಿಯಲೇಬೇಕು
ಒಳ್ಳೆಯ ಕೆಲಸ ಮಾಡ್ತಿರಬೇಕು
ಒಳ್ಳೆಯ ಗುಣಮಣಿಯಾಗಿರಬೇಕು ॥ ೧ ॥

ಉತ್ತಮ ಸಮವಸ್ತ್ರ ಧರಿಸಿರಬೇಕು
ಶಿಸ್ತನು ಅನುದಿನ ಪಾಲಿಸಬೇಕು
ಚಿತ್ತ ಶುದ್ಧಿಯಿಂದ ಆಲಿಸಬೇಕು
ವ್ಯರ್ಥ ತಿರುಗಾಟ ನಿಲ್ಲಿಸಬೇಕು ॥ ೨ ॥

ಸ್ಕೌಟಿನ ಉದ್ದೇಶ ಅರಿತಿರಬೇಕು
ಆಟ ಪಾಠದಲಿ ಮುಂದಿರಬೇಕು
ನೋಟ ನೋಡಲು ಹೋಗಲುಬೇಕು
ಸ್ಕೌಟಿನ ಕೆಚ್ಚನು ತೋರಿಸಬೇಕು ॥ ೩ ॥

ಕಲಿತ ವಿದ್ಯೆಯ ಬಳಸಲುಬೇಕು
ಕಲಿಯದವರಿಗೆ ತಾ ಕಲಿಸಲುಬೇಕು
ಕಲಿಗಳ ಮಾರ್ಗ ತಿಳಿದಿರಬೇಕು
ಒಲವಿನ ನಾಯಕ ನೀನಾಗಬೇಕು ॥ ೪ ॥

ಸಣ್ಣತನವನು ತ್ಯಜಿಸಲುಬೇಕು
ಅಣ್ಣ-ತಮ್ಮರಾಗಿ ಬಾಳಲುಬೇಕು
ಬಣ್ಣದ ಲೋಕಕ್ಕೆ ಹಾರಲುಬೇಕು
ಚಿಣ್ಣರ ಚಿನ್ನನು ನೀನಾಗಬೇಕು ॥ ೫ ॥

ವಿಶ್ವ ಚಳುವಳಿ ನೀ ಸೇರಬೇಕು
ಶಾಶ್ವತ ಪದವಿಯ ನೀ ಪಡಿಬೇಕು
ನಶ್ವರ ದೇಹವ ದಂಡಿಸಬೇಕು
ವಿಶ್ವಕೆ ಮಾದರಿ ನೀನಾಗಬೇಕು ॥ ೬ ॥

— ಎಸ್. ಆರ್. ಪಾಟೀಲ, ಎ.ಎಲ್.ಟಿ.(ಎಸ್)
ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆ, ಕಬ್ಬೂರ
ತಾ॥ ಹಾವೇರಿ, ಜಿ॥ ಧಾರವಾಡ

# ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ವನಮಹೋತ್ಸವ ಆಚರಣೆ

## ಮಹಾತ್ಮಾಗಾಂಧಿ ಸ್ವತಂತ್ರ ಸ್ಕೌಟ್ಸ್ ಮತ್ತು ಗೈಡ್ಸ್ ದಳ—ಆದಿಚುಂಚನಗಿರಿ

ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನದ ಉದ್ಯಾನವನದಲ್ಲಿ ಆಗಸ್ಟ್ 1 ರಂದು ವಿದ್ಯಾರ್ಥಿಗಳಿಗೆ ಉತ್ತಮ ಮೌಲ್ಯಗಳನ್ನು ಅಳವಡಿಸಲು ಹೊಸತನದಲ್ಲಿ ಕಾರ್ಯಕ್ರಮವನ್ನು ನಿಯೋಜಿಸಲಾಗಿತ್ತು. ನೆಹರೂ ವಿದ್ಯಾಶಾಲಾ ಪದವಿ ಪೂರ್ವ ಜೂನಿಯರ್ ಕಾಲೇಜು ಪ್ರಾಂಶುಪಾಲರಾದ ಶ್ರೀ ಚಿಕ್ಕೇಗೌಡರು, ಅಧ್ಯಕ್ಷತೆ ವಹಿಸಿದ್ದರು. ಪ್ರಾಥಮಿಕ ಹಾಗೂ ಕಾಲೇಜಿನ ಹಂತದ ಎಲ್ಲರಿಗೂ ಈ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಣ ಇಂದಿನ ಪೀಳಿಗೆಗೆ ಬಹಳ ಅಗತ್ಯವಿದೆ ಎಂದು ಒತ್ತಿ ಹೇಳಿದರು.

ಎಲ್ಲಾ ಕಾಲೇಜುಗಳಲ್ಲಿ ಈ ಚಟುವಟಿಕೆಗಳನ್ನು ಚುರುಕುಗೊಳಿಸಬೇಕಾಗಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು.

ಸ್ಕೌಟ್ ಮಾಸ್ತರರಾದ ಶ್ರೀ ದೀಕ್ಷಿತ್ ಇವರು ಶಿಬಿರದ ಮುಖ್ಯ ಹುರಿಯಾಳಾಗಿದ್ದರು, ಮತ್ತು ಶ್ರೀ ಉಮರ್ದ್ದ ರಾಜ್ ವಂದಿಸಿದರು.

## ಹೊನ್ನಾವರ ಸೇಂಟ್ ಥಾಮಸ್ ಶಾಲೆ

ಹೊನ್ನಾವರ ಸೆಂಟ್‌ಥಾಮಸ್ ಶಾಲಾ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ 500 ಕ್ಕೂ ಹೆಚ್ಚಿನ ಸಸಿಗಳನ್ನು ನೆಡುವ ಕಾರ್ಯಕ್ರಮವನ್ನು ಲಯನ್ಸ್ ಉದ್ಯಾನವನದಲ್ಲಿ ಹಮ್ಮಿಕೊಳ್ಳಲಾಗಿತ್ತು.

ಮುಖ್ಯ ಅತಿಥಿಗಳಾದ ಆರ್.ಎಫ್.ಓ. ಶ್ರೀ ನಾಗರಾಜ್‌ನಾಯ್ಕ ಉಪಸ್ಥಿತರಿದ್ದು ಪರಿಸರದ ಜಾಗೃತಿಯ ಬಗ್ಗೆ ತಿಳಿಸಿ, ಸ್ಕೌಟ್ಸ್ ಮತ್ತು ಗೈಡ್ಸ್‌ರವರ ಸಮಯ ಪ್ರಜ್ಞೆಯನ್ನು ಶ್ಲಾಘಿಸಿದರು.

ಈ ಸಮಾರಂಭದಲ್ಲಿ ಡಿ.ಟಿ.ಸಿ.(ಎಸ್) ಶ್ರೀ ಬಿ. ಡಿ. ಫರ್ನಾಂಡಿಸ್, ಡಿ.ಓ.ಸಿ.(ಎಸ್) ಶ್ರೀ ವಿ. ವಿ. ನಾಯ್ಕ, ಎ.ಡಿ.ಸಿ.(ಎಸ್) ಶ್ರೀ ಎಸ್. ಜೆ. ಖೈರನ್, ಗೈಡ್‌ಕ್ಯಾಪ್ಟನ್‌ಗಳು ಹಿರಿಯ ಲಯನ್ಸ್ ಸದಸ್ಯರು ಮತ್ತು ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿ ಅಂದಿನ ಕಾರ್ಯಕ್ರಮಕ್ಕೆ ಹೆಚ್ಚು ಮೆರಗು ತಂದಿದ್ದರು.

Phone : 601227
609776

# ದಿ ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್, ಕರ್ನಾಟಕ
# THE BHARAT SCOUTS & GUIDES, KARNATAKA

ಎಂ. ವೀರಪ್ಪ ಮೊಯಿಲಿ
ಮುಖ್ಯಮಂತ್ರಿಗಳು ಮತ್ತು ಅಧ್ಯಕ್ಷರು



STATE HEADQUARTERS
Prof. P. SIVASHANKAR CIRCLE
KONDAJJI BASAPPA ROAD
FORT, BANGALORE - 560 002

Ref. No. : BSG / SHQ / Pre / CM / 988 / 93-94

Date : 26-07-1993

ಆತ್ಮೀಯರೇ,

ಯುವಜನಾಂಗದಲ್ಲಿ ಶಿಸ್ತು ಮತ್ತು ಸೇವಾ ಮನೋಭಾವವನ್ನು ಬೆಳೆಸುವಲ್ಲಿ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ರಾಜ್ಯದಲ್ಲಿ ಎಂಬತ್ತು ವರ್ಷಗಳಿಂದಲೂ ಶ್ರಮಿಸುತ್ತಿದೆ. ಈ ಸಂಸ್ಥೆಯ ಕಾರ್ಯಚಟುವಟಿಕೆಗಳು ಇನ್ನೂ ವ್ಯಾಪಕವಾಗಬೇಕು; ಶಾಲಾ — ಕಾಲೇಜುಗಳ ವಿದ್ಯಾರ್ಥಿಗಳು, ಯುವಜನರು ಎಲ್ಲರೂ ಈ ಸಂಸ್ಥೆಯ ಮೂಲಕ ಸಮಾಜಕ್ಕೆ ಸೇವೆ ಸಲ್ಲಿಸುವ ಸದವಕಾಶವನ್ನು ಪಡೆದುಕೊಳ್ಳಬೇಕು.

ಭಾರತ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ, ಸಂಸ್ಥೆಯು ಹಮ್ಮಿಕೊಳ್ಳುವ ಎಲ್ಲಾ ಕಾರ್ಯಕ್ರಮಗಳು ಯಶಸ್ವಿಯಾಗಲು ರಾಜ್ಯ ಸರ್ಕಾರದ ಪ್ರತಿಯೊಂದು ಇಲಾಖೆಯು ಸಂಪೂರ್ಣ ಸಹಕಾರವನ್ನು ನೀಡುವುದು ಅಗತ್ಯವಾಗಿದೆ.

(ಎಂ. ವೀರಪ್ಪ ಮೊಯಿಲಿ)
ಮುಖ್ಯಮಂತ್ರಿಗಳು ಮತ್ತು ಅಧ್ಯಕ್ಷರು

**6 to 10 Corner**

# "Ungrateful Friend"

Mrs. HEMA VIJAYAKUMAR

There was a thick forest near the river side where a ferocious Tiger lived. One day as the Tiger was feasting on a deer a bone stuck in his throat. A Wood pecker who resided in the branches above silently watched him.

The Tiger desperatly tried to remove the bone from his throat but failed. Thus many days passed and he become weak with starvation and thought he would die if no one came to him. Many animals watched him and passed by silently. They were the hare, the fox, the bear and peacock.

But the Wood pecker wondered with puzzle why the Tiger was lying with his mouth wide open for days. So out of sheer kindness he asked. "What's the matter with you Tiger Brother ? Are you Sick ?"

The Tiger signalled the Woodpecker to come closer and pointed to the bone in his throat.

The Woodpecker felt sad and offered to remove the bone if the Tiger would share his game. The happy Tiger nodded his head in promise.

The Woodpecker flew into the Tiger's mouth and vigorously pulled the bone out. The hungry Tiger forget to thank him and hurriedly ran into the forest in relief.

A few hours later the Tiger killed a "Stag" and began to devour it, but forgot to call the Woodpecker. When the Woodpecker reminded the Tiger of the promised share he roared.

Who are you ? Runaway before I eat you ?"

The Woodpecker was shocked and felt sad that because he was weak. The Tiger did not keep his promise. So he waited patiently till the Tiger finished his meat and dozed.

He flew near the Tiger and pierced his right eye. Blood gushed out. When the Tiger roared in pain and called him "ungrateful wretch", he retorted.

"You know I have a sharp beak. I could easily have blinded you in both eyes. But I did not. Be grateful for that and stop roaring so loudly". O

# National Integration Camp at Bangalore

(from 20th to 29th July, 1993
at Shanthi Gruha, Palace Road, Bangalore-560 002)

---

At Bangalore from 20th to 29th July 1993, Scouts and Guides drawn from 17 States with different religions and cultural background have participated in the above camp. We found unity in diversity and miniature India.

The Camp was inaugurated by His Excellency the Governor of Karnataka, Sri Khurshed Alam Khan and Sri H. Vishwanath, Hon'ble Minister of State for Kannada and Culture, Youth Services and Sports, presided. The message of the Governor was that "Take back with you—the message of Brotherhood/Sisterhood oneness" to each and every house in the country. Sri H. Vishwanath, while presiding said "children should follow the highest values of Scouting and Guiding."

A State Exposition was held three days depicting the cultural heritage, tradition, food habits, educational system etc.,

To mark the religious, social, patriotic, custom, tradition of different States, the following activities were held in the evenings.

| | | Chief Guest |
|---|---|---|
| Devotional Songs on 21-7-1993 | : | Sri A. J. Anandan, IPS<br>Commissioner for Youth Services and Sports<br>Government of Karnataka, Bangalore. |
| Folk Songs of India on 22-7-1993 | : | Sri S. R. Vijay, IAS<br>Chairman, B.W.S.S.B.<br>Bangalore. |
| Patriotic Songs on 23-7-1993 | : | Brig. N. Menon<br>Director, Survey of India<br>Southern Circle, Bangalore. |
| Community Singing on 24-7-1993 | : | Sri S. M. Acharya, IAS<br>Commissioner for Public Instruction<br>Bangalore. |

| | | |
|---|---|---|
| Festivals of India on 25-7-1993 | : | Sri V. K. Gudodagi, Joint Director of Youth Services and Sports, Bangalore. |
| Grand Camp Fire on 26-7-1993 | : | Sri S. C. Sengupta, Divisional Railway Manager, Southern Railways Bangalore. |
| Folk Dances of India on 27-7-1993 | : : | Sri Balasubramanyam, Chief Mechanical Engineer (Retd) Southern Railways, Bangalore. |
| Customes of India on 28-7-1993 | : | Air. Comd. Manbir Singh, Deputy Director General, NCC Directorate, Karnataka & Goa. |

To make them understand, the knowledge of our country, 5 General Knowledge Tests were also conducted at the camp.

A Post-Card Campaign on the theme "I WANT PEACE" was organised and children have sent cards to National Headquarters. An Assignment was given for each State to learn atleast 10 common words and alphabets of other States as well.

To understand and recognise aesthetic sense, competition on Drawing, Cartoon making, Poster-making, were organised with the theme of "VIOLENCE-QUIT INDIA", "Sanitation Promotion" 'Safe Environment', Scouting/Guiding and Humour, Let us laugh together.

An Essay competition was held on the theme "I am an Indian first and last".

A field trip to Bannerghatta National Park, Lalbagh, Government Museum was arranged.

A Route March of all the participating Scouts and Guides to Bal Bhavan and Makkala Koota was organised on 27-7-1993 and the Public of Bangalore responded well.

Inspite of inclement weather, our Scouts and Guides participated in all the events and programmes with zeal and zest.

The Valedictory function was held on 28-7-1993. Sri M. P. Keshava Murthy, Hon'ble Minister of State for Forests, Government of Karnataka, deputising for the Hon'ble Chief Minister of Karnataka, Sri M. Veerappa Moily, delivered the Valedictory address and the speech of the Chief Minister in Kannada was read by the Leader of the

National Intergration camp, Mr. C. S. Reddy, in which the Hon'ble Chief Minister of Karnataka, Sri M. Veeragpa Moily was pleased to promise all help and assistance to the Scout and Guide Movement in the State.

The Detailed report of the camp was read by Mr. Reddy, the Leader of the Camp.

Sri Keshava Murthy Hon'ble Minister of State for Forests, appreciated that spirit, the discipline of the Scouts/Guides and promised to give all support and help to the Movement on behalf of the Government and through the Department of Forest which is headed by him.

The Worshipful Mayor, Sri B. S. Sudhanva, in his presidential address, promised to give all support and help to Bharat Scouts and Guides by the Corporation and promised to start Scouts/Guide units in all the Corporation Schools.

Sri V. P. Deenadayalu Naidu, National Commissioner, Bharat Scouts and Guides, India, blessed the children. Sri K. B. Shanmukhappa, State Chief Commissioner, welcomed the gathering and Dr. C. D. Jathanna, State Commissioner (S) proposed hearty Vote of Thanks.

C. S. REDDY
Leader of the Camp

---

# Our State Secretary, Prof. M. S. Appa Felicitated at Puttur

Our State Secretary, Prof. M. Suryanarayanappa, M.A., M. Com., Principal, Vivekananda College, Puttur, D. K. retired after fruitful service of 20 years, as Principal of the College. A Civic Farewel was arranged on 12-6-1993 by the public of Puttur, alumni of the College and the voluntary organisations.

Prof. M. I. Savadatti, Vice-Chancellor of Mangalore University presided over the function and Mr. Kasturi Nagesh Pai was the Chief Guest at the function.

The Civil Farewell Committee announced an Endowment of Rs. 20,000/ in the name of Prof. M. Suryanarayanappa for Award to students in 3 Colleges of Puttur during the College Day Celebrations.

An Appreciation Purse was also presented to Prof. M. Suryanarayanappa as a mark of distinguished services rendered by him to the development of Education and Human values. Mr. Kasturi Nagesh Pai and Prof. Savadatti praised the services of Prof. M. Suryanarayanappa as Principal of the College for two decades and for having developed the institution with his sincere and dedicated services for its all-round growth and development which has created an impetus in the neighbourhood.



Mr. A. J. Anandan, Commissioner for Youth Services & Sports, receiving Memento from State Chief Commissioner at "DEVOTIONAL SONGS" Programme



Mr. S. M. Acharya, Commissioner of Public Instruction addressing the participants at "COMMUNITY SINGING" programme



Mrs. Audikesavalu, State Org. Commissioner (S) introducing Brig. N. Menon, Director, Survey of India, Southern Circle at "PATRIOTIC SONGS" programme



Mr. V. K. Gudodagi, Jt. Director of Youth Services & Sports, addressing at "FESTIVALS OF INDIA" programme



Sri M. P. Keshava Murthy, Hon'ble Minister of State for Forests deputising for the Chief Minister giving the Valedictory address on 28-7-1993



Mr. V.P. Deenadayalu Naidu, National Commissioner, blessing Scouts/Guides at Valedictory function.



Guides in Action

Mr. C. S. Reddy, Leader of the NI camp presenting Report of the camp at the Valedictory function.

LR : Sri K. B. Shanmukhappa, SCC, Sri M. P. Keshava Murthy, Hon'ble Minister of State for Forests, Dr. C. D. Jathanna SC (S) are seen.



# World Scout Conference

M. A. KHALID
State Treasurer

The World Scout Conference is the "General Assembly" of the Scout movement. Every three years adult leaders of National Scout Organisations meet with the objectives of reviewing policy, supervising and follow-up on the work of Member Countries, so that the movement may progress along unifield lines. The first World Conference was in 1920 at Olympia in London and since then there have been a total of 32 such events. This time rightfully, Bangkok, Thailand was the previleged place to have been chosen to host the 33rd World Scout Conference with the theme as "TOWARDS 2002". This theme is focused on Youth programme, Adults in Scouting, Management, WOSM's own Financial resources and Growth of the movement.

This conference was held from 19-23rd July 1993 at the Majestic Imperial Park Hotel, Bangkok, wherein 1034 delegates and observers attended from 104 countries. Our Country was represented by 19 participants, out of which 6 were delegates and the rest of them being observers. This time the spouses were encouraged to come to attend certain functions and to participate in the special Accompanying persons, programme. From our country there were 3 such spouses. Bangkok the place of conference is a beautiful city with distinctive cultural and natural attractions. A friendly people the congenial Thais with their polite unhabited ways will make visitors feel at ease. Their known hospitality was amply demonstrated during the conference.

The opening day was a real impressive one. All the participants were taken to the Dusit palace, where we were graciously received and addressed by his Royal Highness Crown Prince Maha Vajira Long Kora. His theme of the address was that he always had a strong personal faith in Scout activities and believed that they are of great benefit to humanity, irrespective of their nationality, religion and region. Thereafter H. E. the Prime Minister Mr. Chuan Leekpoi hosted a grand Dinner at the Government house followed by an excellent cultural night.

During the conference, all the participants took a break and were taken by the Host Scout Association to visit the Ancient City, where we witnessed the Art, Customs and Culture of Thais. From here we were taken to the Vajiravudh National Scout Camp which depicts and reveals the excellent training which will be imparted to the Scouts of Thailand. Here we were welcomed for a 'Home Hospitality' which was most memorable. Their hospitality is unmatchable and deserves. to be emulated by all others. To be Candid, words fail to express the

atmosphere. One had to experience this memorable and exciting evening with exposition of Thai Culture, dances and Martial Acts.

All the delibarations were business like and the whole proceedings took place like a Surgeons operations. The conference after deliberations adopted about 20 resolutions on issues relating to co-education, involvement of young members in decision-making in scouting, equal leadership opportunities for Women and Women in the Scout movement, the needs of young people in their Community, Scouting for nature and environment, Solidarity and partnership, intercultural education, AIDS prevention and the Exploitation of child labour.

The conference welcomed Scout organisations from the following countries as new members-CROTIA, KIRIBATI, LATVIA, ROMANIA, and ST. LUCIA. The BRONZE WOLF, the only award given by the World Scout Committees was presented at the conference to 12 veteran scouters. Seven people were elected to the World Committee. A special feature during the Elections was that in the 86 year history of Scouting, Mrs. Gendrin was the first woman to contest for the World Scout Committee.

A special mention should be made about Mr. Ranga Rao who was the only person to receive an award for Eradication of Leprosy. An exclusive functions was arranged to handover the award to Mr. Ranga Rao our Director.

As a grand finale, a farewell dinner was organised by the host organisation which was addressed by H. E. the Dy. Prime Minister Mr. Banyat Boutadtan and Mr. Kowit Vorapipatann, Permanent Secretary of Education and Chairman of the Conference Organising Committee.

---

# Village Adoption By Philomena Rovers & Rangers - A Report

A programme of village adoption by Philomena Rovers & Rangers was held at Indiranagar of Puttur Taluk on 10-7-1993 in the presence of Local M.L.A. Mr. Vinaya Kumar Sorake, who was the Chief Guest of the function. The function was presided by St. Philomena College Principal Rev. Dr. Lawrence Mendonca. The Chief Guests who attended the function included are Mr. Mahammadali (Ex. President of Mandal Panchyat), Mrs. Gracy Gonsalves (Child Development P. O.) & Mr. B. J. Suvarna (Honarary Secretary of Adult & Continuous Literacy Assn.). The function drew wide gatherings which included people from all walks of life responding to our sincere invitations. The main purpose of this programme was the overall development of the adopted village. Some of the chalked out programmes are as follows :

a) Main stress to Literary drive

b) Helping for the self reliance of the New literates

c) Fight against the Scocial evils like alcoholism, smoking, gambling, Dowry system, Over population etc.

d) Environmental Preservation

e) Spreading the spirit of Universal brother-hood and so on.

The College Rover Scout leader welcomed the gathering. The Ranger leader Miss Maria Pinto proposed the vote of thanks. The Asst. Rover leader Naveen A. C. arranged the function.



# TIPS TO UNIT LEADERS

—By S. PAULRAJ, B.A.Ed., LT(S),
District Training Commissioner,
KOLAR GOLD FIELD.

## HOW TO TRAIN THE BOY ?

THE SCOUT MASTER | THE BOY | SCOUTING

To be a successful S. M. a man must be an Admirable crichton (a know all) not a bit of it. He has simply to be a boy-man, that is :

—he must have the boy spirit in him, and must be able to place himself on a right plane with his boys as a first step.

—he must realise the needs, out looks and desires of the different ages of boy life.

—he must deal with individual boy rather than with the mass.

—he must know their needs to promote a Corporate spirit his individuals to gain the best results.

—as an adult in scouting he is a very important person, he needs to develop his competiencies like

a) Functional competiencies

b) Personal competencies

With regard to the first point, the S. M. has to be neither school master nor commanding officer nor Paster, nor Instructor. All that is needed is the capacity to enjoy the out of doors, to enter into the boys ambitions and to find other men who will give their instructions in the desired directions with, it be signalling or estimation, or drawing, nature study, star gazing or poineering.

He has to put himself on the level of the ELDER BROTHER, that is to see things from the boys' point of view and to lead and guide and give enthusiasm in the right direction. Like the true elder brother he has to realise the traditions of the family and see that they are preserved, even if considerable firmness is required all the Jallier because in the game of scouting you are doing the big thing for others you are combating the breeding of selfishness.

The second point scouting is ever modern, Scout training is meeting the needs of youth. The trainingis adopted to modern needs. They receive training to work with trends, neighbours, commu-

nity leaders and other organisations, our training is based on community development, our mottoes be prepared to do our best for service is practicied. Our programmes are modern, community oriented, service oriented like

1. Child health
2. Drug Abuse prevention
3. Clean water and sanitation
4. Literacy
5. Peace education
6. Life skills Training
7. Children at task

Intergration of the handicapped

Family life education

Rights of Children

Food Production and Agriculture

Envoironmental conservation and education

Renewable energies

Reforestation

Job skills training

Youth Un-employment

Education about development issues.

**Thirdly :** The business of the Scout Master is a very interesting one, it is to draw out each boy and find out what is in him, and then to catch hold of the good and develop it to the exclusion of the bad. There is five percent of good even in the worst character. The sport is to find it, and then to develop it on to an 80 or 90 percent basis this is education instead of instruction of the young mind.

**Fourthly :** In the scout training the patrol or gang system gives the corporate expressions of the individual trainings, which brings into practice all that the boy has been taught.

The patrol system has also a great character training value if it is used alright. It leads each boy to see that he has some individual responsibility for the good of his patrol. It leads each patrol that it has definite responsibility for the good of the troop. Through it the scout master is able to pass on not only his instructions but his ideas as to the moral out look of his scouts. Through it the scouts themselves gradually learn that they have considerable say in what their troop does. It is the patrol system that makes the troop and all scouting for that matter a real co-operative efforts.

Lastly success in training the boy largely depends upon the scout master's Own PERSONAL EXAMPLE. It is easy to become the hero as well as the elder brother of the boy. As hero of the boy he is the powerful lever to their development. At the same time the Scout Master should also develop his competencies to train the boys.

What the scout master does, his boys will do.

The scout master is reflected in his scouts.

The following details would help the unit leaders.

**UNIT LEADERS COMPETENCIES**

**FUNCTIONAL COMPETENCIES**

- SCOUTING TECHNIQUES
- PROGRAMME DELIVERY
- ORGANISATION
- PLANNING
- NEED IDENTIFICATION
- RESOURCE MANAGEMENT
- FUND RAISING
- UNIT MANAGEMENT
- TRAINING TECHNIQUES
- EDUCATIONAL SKILLS
- COMMUNICATION
- ETC.

THE EXISTING SYSTEM OF TRAINING NEEDS TO BE REVIEWED, EXPANDED AND MADE HIGHLY FLEXIBLE.

**PERSONAL COMPETENCIES**

- ASSERTIVENESS
- ACTIVE LISTENING
- EMPATHY
- TIME MANAGEMENT
- CREATIVITY
- LEADERSHIP
- VALUE CLARIFICATION
- SELF AWARENESS AND AWARENESS OF OTHERS
- COPING WITH ENVOIRNMENT
- INTER PERSONAL TRUST
- SELF SUFFICIENCY
- ETC.

*Source :* 1. Aids to Scout Mastership
2. Adults in Scouting

"ರಾಷ್ಟ್ರೀಯತೆ, ಧಾರ್ಮಿಕತೆಗಿಂತ ಶ್ರೇಷ್ಠ, ಈ ಅರ್ಥದಲ್ಲಿ ನಾವು ಮೊಟ್ಟಮೊದಲಿಗೆ ಭಾರತೀಯರು, ಅನಂತರ ಹಿಂದುಗಳು, ಮುಸಲ್ಮಾನರು, ಪಾರ್ಸಿಗಳು ಮತ್ತು ಕ್ರಿಶ್ಚಿಯನ್ನರು"

—ಮಹಾತ್ಮಾ ಗಾಂಧಿ

# 47 ನೇ ಸ್ವಾತಂತ್ರ್ಯ ವರ್ಷ

ನಲವತ್ತಾರು ವರ್ಷಗಳ ಹಿಂದೆ ಇಡೀ ರಾಷ್ಟ್ರವೇ ರಾಷ್ಟ್ರಪಿತನ ಹಿಂದೆ ಒಂದಾಗಿ ನಿಂತು ಭಾರತ ಸ್ವಾತಂತ್ರ್ಯ ಜ್ಯೋತಿಗೆ ನಮಿಸಿತು. ನಮಗೆ ಸ್ವಾತಂತ್ರ್ಯ ಗಳಿಸಿಕೊಟ್ಟ ಮಹಾನ್ ತ್ಯಾಗಿಗಳೆಲ್ಲರಿಗೂ ನಾವಿಂದು ಶಿರಬಾಗಿ ನಮಿಸೋಣ.

ಈಗೊಂದು ಹೊಸ ಸ್ವಾತಂತ್ರ್ಯದ ಗಾಳಿ ಕರ್ನಾಟಕದಲ್ಲಿ ಜನಪ್ರಿಯ ಕ್ರಿಯಾಶೀಲ ಮುಖ್ಯಮಂತ್ರಿ ಶ್ರೀ ವೀರಪ್ಪ ಮೊಯಿಲಿ ಅವರ ಪ್ರಗತಿಶೀಲ ಬದಲಾವಣೆಗಳ ಮಧ್ಯೆ.

"ಭ್ರಷ್ಟಾಚಾರದ ಹೆಮ್ಮರವನ್ನು ಬುಡಮೇಲು ಮಾಡುತ್ತೇನೆ. ನಾನದರಡಿ ಹೂತುಹೋದರೂ ಚಿಂತೆಯಿಲ್ಲ" ಎಂದಿದ್ದಾರೆ ದಿಟ್ಟತನದಿಂದ. ಕಡತ ವಿಲೇವಾರಿಯ ಯಜ್ಞ ಜಾರಿಗೆ ಬಂದಿದೆ.

## ಆದ್ಯತಾ ಕ್ಷೇತ್ರಗಳು

- ಕೈಗಾರಿಕೆಯ ಕ್ಷೇತ್ರದಲ್ಲಿ ರಾಜ್ಯವನ್ನು ಇನ್ನೆರಡು ವರ್ಷದಲ್ಲಿ 4ನೇ ಸ್ಥಾನಕ್ಕೂ, ಈ ಶತಮಾನದ ಅಂತ್ಯಕ್ಕೆ ಮೊದಲನೇ ಸ್ಥಾನಕ್ಕೂ ತರಲು ವಿಪುಲ ಬಂಡವಾಳ ಹೂಡಿಕೆ.
- ವಿದ್ಯುಚ್ಛಕ್ತಿ ಉತ್ಪಾದನಾ ಸಾಮರ್ಥ್ಯವನ್ನು ಜಲ ವಿದ್ಯುತ್ ಹಾಗೂ ಥರ್ಮಲ್ ಸ್ಥಾವರಗಳ ಮೂಲಕ ಹೆಚ್ಚಿಸುವ ಪ್ರಯತ್ನ.
- ನೀರಾವರಿ ಸೌಲಭ್ಯ ಹೆಚ್ಚಿಸಿ ಲಕ್ಷೋಪಲಕ್ಷ ಎಕರೆ ಜಮೀನು ಸಾಗುವಳಿಗೆ ಯೋಗ್ಯ ಮಾಡುವುದು.
- ಹೊಸ ಹೊಸ ಯೋಜನೆಗಳ ಮೂಲಕ ವಿದ್ಯುಚ್ಛಕ್ತಿ ಹಾಗೂ ನೀರಾವರಿ ಸೌಲಭ್ಯ ಹೆಚ್ಚಿಸುವುದು.
- ವಿದ್ಯಾಕ್ಷೇತ್ರದ ಪಿಡುಗುಗಳಾದ ಕ್ಯಾಪಿಟೇಷನ್ ಶುಲ್ಕ, ಅನಕ್ಷರತೆಗಳನ್ನು ತೊಡೆದುಹಾಕುವುದು.
- ಕೋಮು ಸೌಹಾರ್ದತೆಯನ್ನು ಬಲಗೊಳಿಸುವುದು.
- ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಕ್ರಿಯಾ ಸಮಿತಿಗಳ ಮೂಲಕ ಕನ್ನಡಕ್ಕೆ ಹೆಚ್ಚು ಹೆಚ್ಚು ಆದ್ಯತೆ. 1993-94ನ್ನು "ಕನ್ನಡ ಜಾಗೃತಿ ವರ್ಷ" ವನ್ನಾಗಿ ಆಚರಿಸುವುದು.
- ಪಂಚಾಯಿತಿ ರಾಜ್ಯ ವ್ಯವಸ್ಥೆ ಮೂಲಕ ಅಧಿಕಾರ ವಿಕೇಂದ್ರೀಕರಣ.
- ಪರಿಶಿಷ್ಟ ಹಾಗೂ ಹಿಂದುಳಿದ ವರ್ಗದವರಿಗೆ ಎಲ್ಲ ಮೀಸಲಾತಿ.
- ಯುವಜನರನ್ನು ದುಶ್ಚಟಗಳಿಂದ ದೂರವಿಡಲು ಕಾರ್ಯಕ್ರಮ.
- 'ನೆರಳಿನ ಭಾಗ್ಯ', 'ಆಶಾಕಿರಣ' 'ಅಕ್ಷಯ', 'ಆಶ್ರಯ' ಇತ್ಯಾದಿ ಸಮಾಜ ಕಲ್ಯಾಣ ಕಾರ್ಯಕ್ರಮಗಳ ಮೂಲಕ ಬಡ ಜನರಿಗೆ ವಿಪುಲ ಸಹಾಯ ಸಹಕಾರ.

**ನಮ್ಮ ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಬಲಿದಾನ—ಸರ್ವತ್ಯಾಗ ಮಾಡಿದ ಹುತಾತ್ಮರ ಕನಸನ್ನು ನನಸಾಗಿಸಲು ಕರ್ನಾಟಕ ಬದ್ಧ.**

" ಕರ್ನಾಟಕ ವಾರ್ತೆ "




Air. Comdr. Manbir Singh, Deputy Director General NCC Directorate, Karnataka & Goa addressing participants at "COSTUMES OF INDIA" programme in National Integration Camp

## Please Follow this

6. I ADMIT I MADE A MISTAKE
5. YOU DID A GOOD JOB
4. WHAT IS YOUR OPINION
3. IF YOU PLEASE
2. THANK YOU
1. WE
0. I

To,

From,
THE BHARAT SCOUTS AND GUIDES
Prof. P. Sivashankar Circle
Kondajji Basappa Road
Fort, Bangalore-560 002

Published for the Bharat Scouts and Guides, Karnataka State Head Quarters, Prof. P. Sivashankar Circle Kondajji Basappa Road, Fort, Bangalore-560 002, by the State Secretary and Printed at S.J.M. Mudrana Pvt. Ltd., Bangalore-560 027 Phone : 236469